

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 17-03-2021 ಪ್ರಶ್ನೆ ಸಂಖ್ಯೆ : 1207 (1470)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 17-03-2021

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು

ವಿಷಯ : ಟೋಲ್ ಪ್ಲಾಜಾಗಳಲ್ಲಿ ಫಾಸ್ಟ್‌ಟ್ಯಾಗ್ ಅಳವಡಿಕೆ ಬಳಿಕವೂ ಸಂಚಾರ ಅವ್ಯವಸ್ಥೆ ಕುರಿತು

(ಅ) ಹೆದ್ದಾರಿಗಳಲ್ಲಿನ ಟೋಲ್ ಪ್ಲಾಜಾಗಳಲ್ಲಿ ಫಾಸ್ಟ್‌ಟ್ಯಾಗ್ ಜಾರಿಯಾದ ಬಳಿಕವೂ ತ್ವರಿತ ಸಂಚಾರ ಸಾಧ್ಯವಾಗದೇ ಕಿ.ಮೀ. ಗಟ್ಟಲೆ ಕ್ಯೂ ನಿಂದಾಗಿ ಸಂಚಾರ ದಟ್ಟಣೆ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಫಾಸ್ಟ್‌ಟ್ಯಾಗ್ ಪೂರ್ಣ ಪ್ರಮಾಣದಲ್ಲಿ ಅನ್ವಯವಾಗದಿರಲು ಇರುವ ತಾಂತ್ರಿಕ ಅಡಚಣೆಗಳೇನು ;

(ಇ) ಫಾಸ್ಟ್‌ಟ್ಯಾಗ್ ಸ್ಕ್ಯಾನ್ ಆಗಿಲ್ಲದೇ ಇರುವಾಗ ಶುಲ್ಕ ಆಕರಿಸಬಾರದೆಂಬ ನಿಯಮವಿದ್ದರೂ ಟೋಲ್‌ಗಳು ನಿಯಮ ಪಾಲಿಸದೇ ಶುಲ್ಕ ಪಡೆಯುತ್ತಿರುವ ಕುರಿತು ಸರ್ಕಾರದ ನಿಲುವೇನು;

(ಈ) ಫಾಸ್ಟ್‌ಟ್ಯಾಗ್ ಹೊಂದಿರುವ ಹಾಗೂ ಹೊಂದದಿರುವ ಗ್ರಾಹಕರು ಒಂದೇ ಪಥದಲ್ಲಿ ಸಂಚರಿಸುವ ವ್ಯವಸ್ಥೆಯಿದ್ದು, ಭಿನ್ನ ಪಥಗಳ ಬಳಕೆಗೆ ಸರ್ಕಾರ ಕೈಗೊಂಡ ಕ್ರಮಗಳೇನು ?